# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು). |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 933 |
| ಉತ್ತರಿಸಬೇಕಾದ ದಿನಾಂಕ | 21.12.2021 |
| ಉತ್ತರಿಸುವವರು | ನಗರಾಭಿವೃದ್ಧಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಾಧಿಕಾರದ ಕಾಯ್ದೆ 1987ರ ಪ್ರಕಾರ ಅಭಿವೃದ್ಧಿ ಪ್ರಾಧಿಕಾರಕ್ಕೆ ಆಯುಕ್ತರನ್ನಾಗಿ ನೇಮಕ ಮಾಡಲು ನಿಗಧಿಪಡಿಸಿದ ಅರ್ಹತೆಗಳೇನು: | ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ 1987ರ ಕಲಂ 12ರನ್ವಯ "ಎ" ದರ್ಜೆಗಿಂತ ಕಡಿಮೆ ದರ್ಜೆಯಲ್ಲದ ಅಧಿಕಾರಿಯನ್ನು ಪ್ರಾಧಿಕಾರದ ಆಯುಕ್ತರನ್ನಾಗಿ ನೇಮಕ ಮಾಡಲು ಅವಕಾಶ ಕಲ್ಪಿಸಲಾಗಿದೆ. |
| ಆ) | ಅರ್ಹತೆ ಇದ್ದಲ್ಲಿ, ಬೀದರ್ ಅಭಿವೃದ್ಧಿ ಪ್ರಾಧಿಕಾರಕ್ಕೆ ಒಬ್ಬ "ಸಿ" ದರ್ಜೆಯ ಪರಿಸರ ಅಭಿಯಂತರರನ್ನು ಯಾವ ನಿಯಮದಡಿ ನೇಮಕ ಮಾಡಲಾಗಿದೆ: | ಶ್ರೀ ಅಭಯಕುಮಾರ, ಪರಿಸರ ಅಭಿಯಂತರರು, ಇವರು ಮೂಲತ: ಪೌರಾಡಳಿತ ನಿರ್ದೇಶನಾಲಯದ ಸೇವೆಗೆ ಸೇರಿದ ಗ್ರೂಪ್-ಬಿ ವೃಂದದ ಅಧಿಕಾರಿಯಾಗಿರುತ್ತಾರೆ. ಇವರನ್ನು ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಸ್ವಂತ ವೇತನ ಶ್ರೇಣಿಯ ಮೇಲೆ ನಿಯೋಜನೆ ಮೇರೆಗೆ ಬೀದರ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಖಾಲಿ ಇರುವ ಆಯುಕ್ತರ ಹುದ್ದೆಗೆ ನಿಯೋಜಿಸಲಾಗಿದೆ. |
| ಇ) | ಪ್ರಾಧಿಕಾರದ ಆಯುಕ್ತರಾಗಿ ಪರಭಾರೆ ಮೇಲೆ ಬಂದಂತಹ ಪರಿಸರ ಅಭಿಯಂತರ (ಪೌರಾಡಳಿತ ಇಲಾಖೆ)ರವರು ನಿಯಮ ಬಾಹಿರ ಕೆಲಸ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಇವರ ವಿರುದ್ಧ ಸರ್ಕಾರ ತೆಗದುಕೊಂಡ ಕ್ರಮವೇನು? | ಸದರಿ ಅಧಿಕಾರಿಯು ನಿಯಮ ಬಾಹಿರ ಕೆಲಸ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ಆದರೆ, ಸದರಿ ಅಧಿಕಾರಿಯು ಶಿಷ್ಟಾಚಾರ ಉಲ್ಲಂಘನೆ ಮಾಡಿರುವ ಬಗ್ಗೆ ಇವರ ವಿರುದ್ಧ ಕ್ರಮ ಕೈಗೊಳ್ಳಬೇಕೆಂದು ಮಾನ್ಯ ಶಾಸಕರಾದ ಶ್ರೀ ಅರವಿಂದ ಕುಮಾರ್ ಅರಳಿ ರವರು ಮಾನ್ಯ ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ ರವರಿಗೆ ಪತ್ರ ಬರೆದಿರುತ್ತಾರೆ. ಸದರಿ ಪತ್ರದಲ್ಲಿ ಪ್ರಸ್ತಾಪಿಸಿರುವ ಅಂಶಗಳ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ತಮ್ಮ ಸ್ಪಷ್ಟ ಅಭಿಪ್ರಾಯದೊಂದಿಗೆ ವರದಿಯನ್ನು ಕಳುಹಿಸಿಕೊಡುವಂತೆ ಜಿಲ್ಲಾಧಿಕಾರಿಗಳು, ಬೀದರ ಜಿಲ್ಲೆ ರವರನ್ನು ಕೋರಲಾಗಿದೆ. ಜಿಲ್ಲಾಧಿಕಾರಿ ರವರಿಂದ ವರದಿ ಪಡೆದು ನಿಯಮಾನುಸಾರ ಕ್ರಮ ಜರುಗಿಸಲಾಗುವುದು. |

**ಸಂಖ್ಯೆ: ನಅಇ 45 ಎಲ್‌ಸಿಕ್ಯೂ 2021**

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು